CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೪, ೨೦೦೩ (ಭಾದ್ರಪದ ೧೩, ಶಕ ವರ್ಷ ೧೯೨೫) | ಸಂಚಿಕೆ ೩೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ (ನಿಯಮ 441)**
**ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಸಿ.ಇ.ಪಿ. ನಂ. 185:2002-03- ಶ್ರೀ ಬಿ.ಪಿ. ಗಂಗಕುಮಾರ್, ಇವರ ಸ್ಥಿರಾಸ್ತಿಯ ಹರಾಜನ್ನು ಸ್ಥಿರೀಕರಣಗೊಳಿಸುವುದು.

**ಉಲ್ಲೇಖ:** 1) ಮಾರಾಟಾಧಿಕಾರಿ, ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ತುಮಕೂರು- ಇವರ ಪ್ರಸ್ತಾವೆ ದಿನಾಂಕ: 24.04.2003.

2) ಶ್ರೀ ಬಿ.ಪಿ. ಗಂಗಕುಮಾರ್, ಇವರ ವಕೀಲರ ಪತ್ರ ದಿನಾಂಕ: 25.01.03.

**ಪೀಠಿಕೆ:**

ಶ್ರೀ ಬಿ.ಪಿ. ಗಂಗಕುಮಾರ್ ಬಿನ್ ಸಿ.ಬಿ. ಪುಟ್ಟಸ್ವಾಮಿ, ಆರ್.ವಿ. ಕಾಲೋನಿ, ತುಮಕೂರು ಇವರು ತುಮಕೂರು ಪಟ್ಟಣ ಸಹಕಾರ ಬ್ಯಾಂಕಿನಿಂದ 1999ನೇ ಸಾಲಿನಲ್ಲಿ ರೂ. 1,50,000-00ಗಳ ಕಟ್ಟಡ ಆಧಾರ ಸಾಲವನ್ನು ಪಡೆದು, ಕಂತುಗಳನ್ನು ಕ್ರಮವಾಗಿ ಮರುಪಾವತಿ ಮಾಡದೆ ಸುಸ್ತಿಯಾಗಿದ್ದು ಇದರ ವಸೂಲಿಗಾಗಿ ಸದರಿ ಬ್ಯಾಂಕು ದಾವಾ ಸಂಖ್ಯೆ: 1087:2001-02 ದಿನಾಂಕ: 25.1.2002 ರಂತೆ ಡಿಕ್ರಿ ಪಡೆಯಲಾಗಿದೆ. ಇದರ ಜಾರಿಗಾಗಿ ಸಿ.ಇ.ಪಿ. ನಂ: 185:2002-03ರಂತೆ ಅಮಲ್ಜಾರಿ ಪಡೆಯಲಾಗಿದೆ. ಇದರ ಜಾರಿ ಮೂಲಕ ಸದರಿ ಸುಸ್ತಿ ಸಾಲಗಾರರು ಬ್ಯಾಂಕಿಗೆ ಆಧಾರ ಮಾಡಿದ್ದ ಸ್ಥಿರಾಸ್ತಿಯನ್ನು ದಿನಾಂಕ: 28.1.2003ರಂದು ಬಹಿರಂಗ ಹರಾಜು ನಡೆಸಲು ಈ ಕಛೇರಿಯಿಂದ ನೋಟೀಸು ನೀಡಲಾಗಿತ್ತು. ಅದರಂತೆ ಸದರಿ ಬ್ಯಾಂಕಿನ ಮಾರಾಟಾಧಿಕಾರಿಯು ಬಹಿರಂಗ ಹರಾಜನ್ನು ದಿನಾಂಕ: 28.1.2003 ರಂದು ಕರ್ನಾಟಕ ಸಹಕಾರ ಸಂಘಗಳ ನಿಯಮಗಳನ್ವಯ ನಡೆಸಿರುತ್ತಾರೆ. ಈ ಹರಾಜಿನಲ್ಲಿ 5 ಜನರು ಭಾಗವಹಿಸಿದ್ದು ಇದರಲ್ಲಿ ಶ್ರೀ ಬಿ.ಎಂ. ನರೇಂದ್ರಬಾಬು ಬಿನ್ ಬಿ.ಪಿ. ಮಾರುತಿ ಮತ್ತು ಟಿ.ಎಂ. ರಾಮಚಂದ್ರ ಬಿನ್ ಬಿ.ಪಿ. ಮಾರುತಿ ಇವರು ಜಂಟಿಯಾಗಿ ಅತಿಹೆಚ್ಚಿನ ಬಿಡ್ ರೂ. 2,25,000-00ಗಳಿಗೆ ಬಿಡ್ ಮಾಡಿರುತ್ತಾರೆ. ಹಾಗೂ ಬಿಡ್ ಮೊತ್ತವನ್ನು ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಉಲ್ಲೇಖ (1)ರನ್ವಯ ಮಾರಾಟಾಧಿಕಾರಿಯು ಈ ಹರಾಜನ್ನು ಸ್ಥಿರೀಕರಿಸಲು ಪ್ರಸ್ತಾವೆ ಸಲ್ಲಿಸಿರುತ್ತಾರೆ. ಹರಾಜು ಮೊಬಲಗು ಮಾರುಕಟ್ಟೆ ದರಗಳಿಗೆ ಅನ್ವಯವಾಗಿದೆ.

ಈ ಹರಾಜನ್ನು ಬಿಡ್‌ದಾರರ ಹೆಸರಿಗೆ ಸ್ಥಿರೀಕರಣ ಮಾಡುವ ಮುಂದೆ ಸದರಿ ಸುಸ್ತಿಸಾಲಗಾರರಾದ ಶ್ರೀ ಬಿ.ಪಿ. ಗಂಗಕುಮಾರ್ ರವರಿಗೆ ದಿನಾಂಕ: 30.4.2003ರಂದು ನೋಟೀಸು ನೀಡಿ ಬಾಕಿ ಇರುವ ಮೊಬಲಗು ರೂ. 2,25,000-00 ಮತ್ತು ಇತರೆ ವೆಚ್ಚಗಳನ್ನು ಒಂದು ವಾರದೊಳಗಾಗಿ ಮರುಪಾವತಿ ಮಾಡಲು ತಿಳಿಸಲಾಗಿತ್ತು. ತಪ್ಪಿದಲ್ಲಿ ಈ ಹರಾಜನ್ನು ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಲು ಅವರ ಆಕ್ಷೇಪಣೆ ಇಲ್ಲವೆಂದು ಪರಿಗಣಿಸಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿತ್ತು. ಈ ನೋಟೀಸಿಗೆ ಶ್ರೀ ಬಿ.ಪಿ. ಗಂಗಕುಮಾರ್‌ರವರು ವಕೀಲರ ಮೂಲಕ ದಿನಾಂಕ: 5.6.2003ರಂದು ಉತ್ತರ ಸಲ್ಲಿಸಿರುತ್ತಾರೆ. ಈ ಸಾಲದ ವಸೂಲಿಗೆ ಅವಾರ್ಡ್ ಆಗಿರುವ ವಿಷಯ ತಮಗೆ ತಿಳಿಯದೆಂದೂ ಅದಕ್ಕೆ ತಾವು ಬದ್ಧರಲ್ಲವೆಂದೂ ತಿಳಿಸಿ ಈ ಹರಾಜಿಗೆ ತಾವು ಬದ್ಧರಲ್ಲವೆಂದು ತಿಳಿಸಿರುತ್ತಾರೆ. ತಮಗೆ ಹೃದಯ ತೊಂದರೆ ಇದ್ದು 55 ವರ್ಷ ವಯಸ್ಸಾಗಿದ್ದು, ಪ್ರತ್ಯೇಕ ಆದಾಯ ಇಲ್ಲದೆ ಇರುವುದರಿಂದ ಇವರ ಆಸ್ತಿಯನ್ನು ಮಾರಾಟ ಮಾಡಿ ಈ ಸಾಲವನ್ನು ಮರುಪಾವತಿ ಮಾಡುವುದಾಗಿ ತಿಳಿಸಿರುತ್ತಾರೆ. ಅದಕ್ಕೆ ಕಾಲಾವಕಾಶ ಕೋರಿರುತ್ತಾರೆ. ಆದರೆ ಈ ಸುಸ್ತಿದಾರರು

1999ನೇ ಸಾಲಿನಲ್ಲಿ ರೂ. 1,50,000-00 (ಒಂದು ಲಕ್ಷ ಐವತ್ತು ಸಾವಿರ) ಸಾಲ ಪಡೆದು ಇದುವರೆಗೆ ಅಂದರೆ ಅವಾರ್ಡ್ ಆಗುವವರೆಗೆ ಸುಮಾರು 40 ತಿಂಗಳ ಅವಧಿಯಲ್ಲಿ ಕೇವಲ ರೂ. 6,000-00ಗಳನ್ನು ಮಾತ್ರ ಅಸಲಿಗೆ ಪಾವತಿಸಿರುತ್ತಾರೆ. ಬ್ಯಾಂಕಿನ ಸಾಲವು ಸುಸ್ತಿಯಾಗಿದ್ದು, ಈ ಸುಸ್ತಿದಾರರು ಸಾಲವನ್ನು ಮರುಪಾವತಿ ಮಾಡುವ ಸ್ಥಿತಿಯಲ್ಲಿ ಇಲ್ಲದಿರುವುದರಿಂದಲೂ ಹಾಗೂ ಬಿಡ್‌ದಾರರು ಈ ಆಸ್ತಿಯನ್ನು ಕೊಂಡು ಬಿಡ್ ಮೊತ್ತವನ್ನು ಪಾವತಿಸಿ ಸ್ಥಿರಾಸ್ತಿ ಹರಾಜನ್ನು ಸ್ಥಿರೀಕರಣಗೊಳಿಸಿಕೊಡಲು ಕೋರಿರುವುದರಿಂದಲೂ ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ**

**ಸಂಖ್ಯೆ: ವ.ಅ: ಎಫ್‌ಎಸ್‌ಎ:1:2003-04 ದಿನಾಂಕ: 12ನೇ ಜೂನ್, 2003**

ಪಿ.ಎನ್. ಶಿವರುದ್ರಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ (ನಿಯಮ 441), ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 28ರನ್ವಯ ನನಗೆ ದತ್ತವಾದ, ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯು 213, ಸಿಎಲ್ ನಂ.91, ದಿನಾಂಕ: 4.5.1991ರನ್ವಯ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಶ್ರೀ ಜಿ.ಪಿ. ಗಂಗಕುಮಾರ್ ಬಿನ್ ಸಿ.ಬಿ. ಪುಟ್ಟಸ್ವಾಮಿ, ಆರ್.ವಿ. ಕಾಲೋನಿ, ತುಮಕೂರು ಇವರ ಖಾತೆಯಲ್ಲಿರುವ ಈ ಕೆಳಕಂಡ ಸ್ಥಿರಾಸ್ತಿಯ ಹರಾಜನ್ನು, ತುಮಕೂರು ಪಟ್ಟಣ ಸಹಕಾರ ಬ್ಯಾಂಕಿಗೆ ಬರಬೇಕಾದ ಸಾಲ ಬಾಕಿ 2,25,000-00 ರೂ. (ಎರಡು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿ)ಗಳ ವಸೂಲಿ ಬಗ್ಗೆ ಅಮಲ್ಜಾರಿ ಅರ್ಜಿ ಸಂಖ್ಯೆ: ಸಿಇಪಿ: 185: 2001-02ರ ಪ್ರಕಾರ ದಿನಾಂಕ: 28.1.2003ರಂದು ಜರುಗಿದ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತ ರೂ. 2,25,000-00ಗಳಿಗೆ ಬಿಡ್ ಮಾಡಿದ ಶ್ರೀ ಬಿ.ಎಂ. ರಾಮಚಂದ್ರ ಬಿನ್ ಟಿ.ಪಿ. ಮಾರುತಿ ಮತ್ತು ಶ್ರೀ ಜಿ.ಎಂ. ನರೇಂದ್ರಬಾಬು ಬಿನ್ ಬಿ.ಪಿ. ಮಾರುತಿ, ಆರ್.ವಿ. ಕಾಲೋನಿ, ತುಮಕೂರು ಇವರುಗಳ ಹೆಸರಿಗೆ ಸ್ಥಿರೀಕರಣ ಮಾಡುವ ಹರಾಜು ದಿನಾಂಕಕ್ಕೆ ಬಾಕಿ ಇದ್ದ ರೂ. 2,24,000-00ಗಳ ಜಾತಾ ಬಾಕಿ ಮೊಬಲಗನ್ನು ಸುಸ್ತಿದಾರರಿಗೆ ಮರುಪಾವತಿ ಮಾಡಲು ಡಿಕ್ರಿ ಹೋಲ್ಡರ್ ಬ್ಯಾಂಕಿನ ವ್ಯವಸ್ಥಾಪಕರಿಗೆ ಸೂಚಿಸಿದೆ.

**ಸ್ಥಿರಾಸ್ತಿಯ ವಿವರ**

ತುಮಕೂರು ನಗರದ ವೆಂಕಟರಾವ್ ಕಾಲೋನಿ, ಮುನ್ಸಿಪಲ್ ಖಾತಾ ನಂ. 2899: 2554 ಅಳತೆ ಪೂರ್ವ ಪಶ್ಚಿಮ 25.9 ಅಡಿಗಳು, ಉತ್ತರ ದಕ್ಷಿಣ 15.2 ಅಡಿಗಳು, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ ಸ್ಮಶಾನ, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಭೈರೇಗೌಡರ ಸ್ವತ್ತು, ದಕ್ಷಿಣಕ್ಕೆ ರಸ್ತೆ, ಈ ಮಧ್ಯೆ ಇರುವ ಸ್ವತ್ತು.

ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 12.06.2003ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿ (ನಿಯಮ-441)
ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ಲಿ.,
ಜೆ.ಸಿ. ರಸ್ತೆ, ತುಮಕೂರು.

**ಫಾರಂ ನಂಬರ್ 10**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರನ್ವಯ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ)**

**ಅಮಲ್ಜಾರಿ ಸಂಖ್ಯೆ: 185:2002-03**

**ಉಪಸ್ಥಿತರು:** ಪಿ.ಎನ್. ಶಿವರುದ್ರಪ್ಪ, ಬಿ.ಎಸ್.ಸಿ. ಹೆಚ್.ಡಿ.ಸಿ., ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ (ನಿಯಮ 441) ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು.

**ಡಿಕ್ರಿ ಹೋಲ್ಡರ್:**

ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿಯಮಿತ,
ತುಮಕೂರು.

**ಸುಸ್ತಿದಾರರು:**

ಜಿ.ಪಿ. ಗಂಗಕುಮಾರ್
ಬಿನ್ ಸಿ.ಜಿ. ಪುಟ್ಟಸ್ವಾಮಿ
ಆರ್.ವಿ. ಕಾಲೋನಿ, ತುಮಕೂರು.

ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ನಿಯಮಿತ, ಜೆ.ಸಿ. ರಸ್ತೆ, ತುಮಕೂರು ಇವರು ದಿನಾಂಕ: 25.01.2002ರಂದು ಪಡೆದ ಡಿಕ್ರಿ ನಂಬರ್ 1087:2001-02ರ ಪ್ರಕಾರ ದಿನಾಂಕ: 30.06.2002ರಂದು ಸಿ.ಇ.ಪಿ. ನಂ: 185:2002-03ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು, ಮೇಲ್ಕಂಡ ಸುಸ್ತಿದಾರರಾದ ಜಿ.ಪಿ. ಗಂಗಕುಮಾರ್ ಬಿನ್ ಸಿ.ಬಿ. ಪುಟ್ಟಸ್ವಾಮಿ, ಆರ್.ವಿ. ಕಾಲೋನಿ, ತುಮಕೂರು ಇವರು ಡಿಕ್ರಿಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ: 28.01.2003ರಂದು ತುಮಕೂರು ಪಟ್ಟಣ ಸಹಕಾರ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗ್ಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಹರಾಜಿನಲ್ಲಿ ಸದರಿ ಸುಸ್ತಿದಾರರ ಸ್ಥಿರಾಸ್ತಿಯನ್ನು ಬಿ.ಎಂ. ರಾಮಚಂದ್ರ ಬಿನ್ ಜಿ.ಪಿ. ಮಾರುತಿ ಮತ್ತು ಬಿ.ಎಂ. ನರೇಂದ್ರಬಾಬು ಬಿನ್ ಜಿ.ಪಿ. ಮಾರುತಿ, ಆರ್.ವಿ. ಕಾಲೋನಿ, ತುಮಕೂರು, ಇವರುಗಳು ರೂ. 2,25,000-00 (ಎರಡು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿ)ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿ ಹರಾಜನ್ನು ಬಿಡ್‌ದಾರರಾದ ಬಿ.ಎಂ. ರಾಮಚಂದ್ರ ಬಿನ್ ಜಿ.ಎ. ಮಾರುತಿ ಮತ್ತು ಶ್ರೀ ಜಿ.ಎಂ. ನರೇಂದ್ರಬಾಬು ಬಿನ್ ಜಿ.ಪಿ. ಮಾರುತಿ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

ತುಮಕೂರು ನಗರದ ವೆಂಕಟರಾವ್ ಕಾಲೋನಿ, ಮು.ಖಾತಾ ನಂ. 2899:2554, ಇದರ ಅಳತೆ ಪೂರ್ವ ಪಶ್ಚಿಮ 25.9 ಅಡಿ, ಉತ್ತರ ದಕ್ಷಿಣ 15.2 ಅಡಿ, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ ಸ್ಮಶಾನ, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಭೈರೇಗೌಡರ ಸ್ವತ್ತು, ದಕ್ಷಿಣಕ್ಕೆ ರಸ್ತೆ, ಈ ಮಧ್ಯೆ ಇರುವ ಸ್ವತ್ತು.

ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 12.06.2003ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿ (ನಿಯಮ-441)
ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ಲಿ.,
ಜೆ.ಸಿ. ರಸ್ತೆ, ತುಮಕೂರು.

**ಫಾರಂ ನಂಬರ್ 11**

**(38ನೇ ನಿಯಮದ 7ನೇ ಕಲಂ)**

**ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಕ್ಕೆ ಪ್ರಕಟಣೆ**

ತುಮಕೂರು ಜಿಲ್ಲಾ, ತುಮಕೂರು ತಾಲ್ಲೂಕು, ತುಮಕೂರು ನಗರದ ಆರ್.ವಿ. ಕಾಲೋನಿಯಲ್ಲಿ ವಾಸವಾಗಿರುವ ಶ್ರೀ ಬಿ.ಎಂ. ರಾಮಚಂದ್ರ ಬಿನ್ ಜಿ.ಪಿ. ಮಾರುತಿ ಮತ್ತು ಶ್ರೀ ನರೇಂದ್ರಬಾಬು ಬಿನ್ ಜಿ.ಪಿ. ಮಾರುತಿ ಇವರುಗಳು ಈ ಕೆಳಗೆ ನಮೂದಿಸಿರುವ ವಿವರದ ಸ್ಥಿರಾಸ್ತಿಯನ್ನು ಎರಡು ಸಾವಿರದ ಮೂರನೇ ಇಸವಿ ಜನವರಿ ತಿಂಗಳ ಇಪ್ಪತ್ತೆಂಟನೇ ದಿನಾಂಕದಂದು ಬಹಿರಂಗ ಹರಾಜಿನಲ್ಲಿ ಕ್ರಯಕ್ಕೆ ಪಡೆದುಕೊಂಡಿರುವುದಾಗಿಯೂ ಮತ್ತು ದರಖಾಸ್ತು ಹಣ ರೂ. 2,25,000-00 (ಎರಡು ಲಕ್ಷ ಇಪ್ಪತ್ತೈದು ಸಾವಿರ)ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸಲಾಗಿರುತ್ತದೆ. ಆದಪ್ರಯುಕ್ತ ಸದರಿ ಸ್ಥಿರಸ್ವತ್ತಿನಲ್ಲಿರುವ ಬಾಕಿದಾರರ ಎಲ್ಲಾ ಹಕ್ಕು ಪ್ರಯೋಜನಗಳಿಗೆ ಶ್ರೀ ಜಿ.ಎಂ. ರಾಮಚಂದ್ರ ಬಿನ್ ಜಿ.ಪಿ. ಮಾರುತಿ ಮತ್ತು ಶ್ರೀ ಬಿ.ಎಂ. ನರೇಂದ್ರಬಾಬು ಬಿನ್ ಜಿ.ಪಿ. ಮಾರುತಿ, ಆರ್.ವಿ. ಕಾಲೋನಿ, ತುಮಕೂರು ಇವರೇ ಉತ್ತರಾಧಿಕಾರಿಗಳಾಗಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಲಾಗಿದೆ.

**ಸ್ಥಿರಾಸ್ತಿಯ ವಿವರ**

ತುಮಕೂರು ನಗರದ ವೆಂಕಟರಾವ್ ಕಾಲೋನಿ, ಮು.ಖಾತಾ ನಂ. 2899:2554, ಇದರ ಅಳತೆ ಪೂರ್ವ ಪಶ್ಚಿಮ 25.9 ಅಡಿ, ಉತ್ತರ ದಕ್ಷಿಣ 15.2 ಅಡಿ, ಇದಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ ಸ್ಮಶಾನ, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಭೈರೇಗೌಡರ ಸ್ವತ್ತು, ದಕ್ಷಿಣಕ್ಕೆ ರಸ್ತೆ, ಈ ಮಧ್ಯೆ ಇರುವ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿ (ನಿಯಮ-441)
ತುಮಕೂರು ಪಟ್ಟಣ ಸಹಕಾರ ಬ್ಯಾಂಕ್ ಲಿ.,
ಜೆ.ಸಿ. ರಸ್ತೆ, ತುಮಕೂರು.

ಪಿ.ಆರ್.973

## ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, 7ನೇ ವೃತ್ತ, ಮೈಸೂರು

**ಅಧಿಸೂಚನೆ**

**ಕ್ರ. ಸಂಖ್ಯೆ: 22212085: 03-04, ದಿನಾಂಕ: 30ನೇ ಜುಲೈ, 2003**

ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, 7ನೇ ವೃತ್ತ, ಮೈಸೂರು ಈ ಕಛೇರಿಯಿಂದ ದಿನಾಂಕ: 20-12-2001ರಂದು ಮೆ: ಸಂದೀಪ್ ಆಟೋಮೊಬೈಲ್ಸ್ ಪ್ರೈ. ಲಿ., ನಂ.55ಬಿ:1, ಸ್ಟರ್ಲಿಂಗ್ ಚಿತ್ರಮಂದಿರ ರಸ್ತೆ, ವಿಶ್ವೇಶ್ವರನಗರ, ಮೈಸೂರು ಇವರಿಗೆ 5(ಐದು) ಸಿ-ನಮೂನೆ ಹಾಳೆಗಳ ಕ್ರ. ಸಂಖ್ಯೆ: 0768829 ರಿಂದ 0768833ರ ವರೆಗೆ ಈ ಕಛೇರಿಯಿಂದ ನೀಡಲಾಗಿತ್ತು. ಆದರೆ, ಈ ಸಂಬಂಧ ಈ ಕೆಳಕಂಡ 5(ಐದು) ಸಿ-ನಮೂನೆ ಕಳೆದು ಹೋಗಿದೆಯೆಂದು ಕರದಾತರು ಈ ಕಛೇರಿಗೆ ತಿಳಿಸಿ, ಹಾಗೂ ದಿನಾಂಕ: 16.7.2003ರಂದು 'ಆಂದೋಲನ' ದಿನಪತ್ರಿಕೆಯಲ್ಲಿಯೂ ಪ್ರಕಟವಾಗಿರುವ ಪ್ರತಿಯನ್ನು ಸಲ್ಲಿಸಿರುತ್ತಾರೆ. ಇದರ ಬಗ್ಗೆ ಪೊಲೀಸರಿಗೆ ದಿನಾಂಕ: 11.7.2003ರಂದು ದೂರು ನೀಡಿ ಇತರ ವಿವರಗಳನ್ನು ಸಲ್ಲಿಸಿರುತ್ತಾರೆ. ಹಾಗೂ ನಮೂನೆ-ಜಿ (ನಷ್ಟ ಭರ್ತಿಬಂಧ ಪ್ರಮಾಣ ಪತ್ರ)ಯನ್ನು ಕಛೇರಿಗೆ ಸಲ್ಲಿಸಿರುತ್ತಾರೆ. ಈ ಎಲ್ಲಾ ವಿವರಗಳನ್ನು ಪರಿಶೀಲಿಸಿ ಈ ಕೆಳಕಂಡ ಸಿ-ನಮೂನೆಗಳನ್ನು ಅಸಿಂಧುಗೊಳಿಸಲಾಗಿದೆಯೆಂದು **ಅಧಿಸೂಚನೆ** ಹೊರಡಿಸಲಾಗಿದೆ.

| ಕ್ರ. ಸಂ. | ಸಿ-ನಮೂನೆ ಹಾಳೆಗಳ ಕ್ರಮ ಸಂಖ್ಯೆ | ಸಿ-ನಮೂನೆಗಳ ವಿವರಣೆ |
|---|---|---|
| 1. | 0768829 ರಿಂದ 0768833 ವರೆಗೆ | ಉಪಯೋಗಿಸದೇ ಇರುವ ಐದು ಸಿ-ನಮೂನೆಗಳು |

ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು,
7ನೇ ವೃತ್ತ, ಮೈಸೂರು.

ಪಿ.ಆರ್.978

**ಕೃಷಿ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಪಿ.ಹೆಚ್. ಬನಸೋಡೆ, ಕೃಷಿ ಸಹಾಯಕ (ಓಪಿಜಿ ಸಹಾಯಕ ಕೃಷಿ ಅಧಿಕಾರಿ) ಇವರ ಅನಧಿಕೃತ ಗೈರು ಹಾಜರಿ-ಶಿಸ್ತುಕ್ರಮ.

**ಓದಲಾಗಿದೆ:**
1) ನಂ.ಜಿಜಅಕೊ: ಆಡಳಿತ:ಕೃಸ:2002-03, ದಿನಾಂಕ:11.7.2002, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೊಪ್ಪಳ.
2) ಸಂಖ್ಯೆ: ಸಿಬ್ಬಂದಿ-1: ವಿಚಾರಣೆ-6:7:02-03, ದಿನಾಂಕ: 1.10.2002.
3) ನಂ. ಸಿಬ್ಬಂದಿ:ಕೃಸ:ಪಿಹೆಚ್‌ಬ: ಗೈಹಾ:2002-03, ದಿನಾಂಕ: 18:19.10.2002, ಸಹಾಯಕ ಕೃಷಿ ನಿರ್ದೇಶಕರು, ಜಿಲ್ಲಾ ಜಲಾನಯನ ಅಭಿವೃದ್ಧಿ ಕಛೇರಿ, ಕೊಪ್ಪಳ.
4) ಸಿಬ್ಬಂದಿ-1:ವಿಚಾರಣೆ-6:7:02-03, ದಿನಾಂಕ: 26.12.2002 (ಪತ್ರಿಕಾ ಪ್ರಕಟಣೆ).
5) ನಂ. ವಾಇ:ವಾಪ್ರವಿ:ಸಿ-2:2001-02:2132, ದಿನಾಂಕ: 8:9.1.03, ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ಬನಸೋಡೆ, ಕೃಷಿ ಸಹಾಯಕ ಇವರು ಈ ಹಿಂದೆ ಕೃಷಿ ಅಧಿಕಾರಿಗಳು (ಡಿ.ಎಲ್.ಡಿ.ಬಿ.) ಕುಷ್ಟಗಿ ಕಛೇರಿಯ ತುರ್ವಿಹಾಳ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ:ಸಕೃಅ:3:96-97, ದಿನಾಂಕ: 27.5.1997ರ ಪ್ರಕಾರ ಕೃಷಿ ಸಹಾಯಕ ಹುದ್ದೆಯಿಂದ ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ ಬಡ್ತಿ ಹೊಂದಿದ್ದು, ಸಹಾಯಕ ಕೃಷಿ ನಿರ್ದೇಶಕರು, ಕುಷ್ಟಗಿ ಕಛೇರಿಗೆ ನೇಮಿಸಲಾಗಿರುತ್ತದೆ. ಆದರೆ ಸದರಿಯವರು ಕೃಷಿ ಅಧಿಕಾರಿ ಡಿ.ಎಲ್.ಡಿ.ಬಿ. ಕುಷ್ಟಗಿ ಕಛೇರಿಯಿಂದ ಬಿಡುಗಡೆ ಹೊಂದುವುದಕ್ಕಿಂತ ಪೂರ್ವದಲ್ಲಿ ಅಂದರೆ ದಿನಾಂಕ: 3.7.1997 ರಿಂದ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಸದರಿ ನೌಕರರು ದಿನಾಂಕ: 3.7.97ರಿಂದ ಇಲ್ಲಿಯವರೆಗೆ ಯಾವುದೇ ಪೂರ್ವಾನುಮತಿ ಪಡೆಯದೆ ಹಾಗೂ ರಜಾ ಅರ್ಜಿ ಸಲ್ಲಿಸದೇ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆಂದು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಓದಲಾದ ಕ್ರ.ಸಂ. (1)ರಲ್ಲಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೊಪ್ಪಳ ರವರು ಸಂಬಂಧಪಟ್ಟ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2) ಸದರಿ ನೌಕರರು ದಿನಾಂಕ: 3.7.97ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರಡಿಯಲ್ಲಿ ಶಿಸ್ತುಕ್ರಮ ಜರುಗಿಸಲು ನಿರ್ಧರಿಸಿ ಸದರಿಯವರಿಗೆ ಕಾರಣ ಕೇಳುವ ಸೂಚನಾ ಪತ್ರ ಹಾಗೂ ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4ನ್ನು ಜಾರಿ ಮಾಡಲು ಓದಲಾದ ಕ್ರ.ಸಂ. (2)ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಕೊಪ್ಪಳ: ಕುಷ್ಟಗಿ ರವರಿಗೆ ಕಳುಹಿಸಲಾಗಿದೆ.

3) ಆದರೆ ದಿನಾಂಕ: 19.10.2002ರ ಪತ್ರದಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಕುಷ್ಟಗಿ ರವರು ಈ ಕಾರ್ಯಾಲಯದಲ್ಲಿ ಸದರಿ ನೌಕರರು ಕಾರ್ಯ ನಿರ್ವಹಿಸುವುದಿಲ್ಲ ಎಂದು ತಿಳಿಸಿರುತ್ತಾರೆ. ಆದ್ದರಿಂದ ಸದರಿ ದೋಷಾರೋಪಣಾ ಪಟ್ಟಿಯನ್ನು ಕೃಷಿ ಅಧಿಕಾರಿ, (ಜಲಾನಯನ ಅಭಿವೃದ್ಧಿ ಇಲಾಖೆ) ಕೊಪ್ಪಳರವರು ಕಛೇರಿಯ ಸಿಬ್ಬಂದಿ ಮೂಲಕ ಜಾರಿ ಮಾಡಲು ವ್ಯವಸ್ಥೆ ಮಾಡಿದ್ದು ಸದರಿಯವರು ತಿಳಿಸಿರುವ ವಿಳಾಸದಲ್ಲಿ ಲಭ್ಯವಿಲ್ಲದೆ ಇರುವುದಕ್ಕೆ ಸ್ಥಳೀಯ ಮಹಜರ್‌ನೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಸಹಾಯಕ ಕೃಷಿ ನಿರ್ದೇಶಕರು (ಜಿಲ್ಲಾ ಜಲಾನಯನ ಅಭಿವೃದ್ಧಿ ಇಲಾಖೆ) ಕೊಪ್ಪಳ ರವರು ಸದರಿಯವರ ವಿಳಾಸ ಶ್ರೀ ಪಿ.ಹೆಚ್. ಬನಸೋಡೆ, ಕೃಷಿ ಸಹಾಯಕ, ಕೇರಾಫ್ ಜೆ.ವೈ. ಹೊಸಮನಿ, ಅಸಾರ ಓಣಿ, ಬಿಜಾಪುರ-2 ವಿಳಾಸಕ್ಕೆ ನೋಂದಾಯಿತ ಅಂಚೆ ಮೂಲಕ ದಿನಾಂಕ: 11.10.2002ರಲ್ಲಿ ಕಳುಹಿಸಲಾಗಿ ಸದರಿಯವರು ಲಭ್ಯವಿಲ್ಲದ ಪ್ರಯುಕ್ತ ಮರಳಿ ಬಂದಿರುವ ನೋಂದಣಿ ಅಂಚೆ ಲಕೋಟೆಯೊಂದಿಗೆ ಓದಲಾದ ಕ್ರ.ಸಂ. (3)ರಲ್ಲಿ ಹಿಂದಿರುಗಿ ಕಳುಹಿಸಿರುತ್ತಾರೆ.

4) ಶ್ರೀ ಪಿ.ಹೆಚ್. ಬನಸೋಡೆ, ಕೃಷಿ ಸಹಾಯಕ, ಕೃಷಿ ಅಧಿಕಾರಿಗಳು (ಭೂಸಾರ ಸಂರಕ್ಷಣೆ) ಕುಷ್ಟಗಿ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದಾಗ ದಿನಾಂಕ: 3.7.97ರಿಂದ ಅನಧಿಕೃತ ಗೈರು ಹಾಜರಿಯಾಗಿದ್ದು ಕೆಲಸಕ್ಕೆ ಮರಳುವಂತೆ ಇಲಾಖೆಯಿಂದ ಕಳುಹಿಸಿದ ಪತ್ರಗಳು ಸ್ವವಿಳಾಸಕ್ಕೆ ಹಾಗೂ ಕೇಂದ್ರಸ್ಥಾನಕ್ಕೂ ಮತ್ತು ಬಡ್ತಿ ನೀಡಿ ನೇಮಕ ಮಾಡಿದ ಕಛೇರಿಗೆ ಕಳುಹಿಸಿದಾಗ್ಯೂ ಸಹ ವಾಪಸ್ಸು ಬಂದಿರುತ್ತದೆ. ಈ ರೀತಿ ಅವರ ಇರುವಿಕೆಯು ತಿಳಿದು ಬರುತ್ತಿಲ್ಲವಾದ ಕಾರಣ ನಿಯಮ 14(ii)ರಂತೆ ಏಕಪಕ್ಷೀಯವಾಗಿ ನಿರ್ಧಾರ ಕೈಗೊಳ್ಳಲಾಗುವುದು ಎಂದು ದಿನಪತ್ರಿಕೆಗಳಲ್ಲಿ ಪ್ರಕಟಿಸುವಂತೆ ಓದಲಾದ ಕ್ರ.ಸಂ. (4)ರಲ್ಲಿ ನಿರ್ದೇಶಕರು, ವಾರ್ತಾ ಇಲಾಖೆ, ಬೆಂಗಳೂರು ರವರನ್ನು ನಿಯಮ 28ಎ(2) ಕೋರಲಾಗಿತ್ತು. ಅದರಂತೆ ಓದಲಾದ ಕ್ರ.ಸಂ. (5)ರಲ್ಲಿ ದಿನಾಂಕ: 2.2.2003ರಂದು ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವ ಬಗ್ಗೆ ವರದಿ ಮಾಡಿರುತ್ತಾರೆ. ಪತ್ರಿಕಾ ಪ್ರಕಟಣೆಯಲ್ಲಿ ನೀಡಲಾಗಿದ್ದ 15 ದಿವಸಗಳ ಅವಧಿ ಮೀರಿದ್ದರೂ ಸಹ ಆರೋಪಿತರು ಕಛೇರಿಗಾಗಲೀ ಅಥವಾ ವಿಚಾರಣೆಗಾಗಲೀ ಹಾಜರಾಗಿರುವುದಿಲ್ಲ. ಈ ಕಾರಣದಿಂದ ಸಿಸಿಎ ನಿಯಮ 14(ii)ರ ಪ್ರಕಾರ ಏಕಪಕ್ಷೀಯವಾಗಿ ಕ್ರಮ ಜರುಗಿಸಲು ನಿರ್ಧರಿಸಿ ದೋಷಾರೋಪಣಾ ಪಟ್ಟಿಯ ಅನುಬಂಧ-3ರಲ್ಲಿನ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಾಖಲಾತಿಗಳ ಪರಿಶೀಲನೆಯಿಂದ ನೌಕರರ ಅನಧಿಕೃತ ಗೈರು ಹಾಜರಿಯಾಗಿರುವುದನ್ನು ಖಚಿತಪಡಿಸಿಕೊಳ್ಳಲಾಯಿತು. ವಿಷಯದ ಬಗ್ಗೆ ನೌಕರರು ಏನೂ ಹೇಳುವುದಿಲ್ಲವೆಂದು ಭಾವಿಸಿ ಅಂತಿಮ ನಿರ್ಣಯ ಕೈಗೊಳ್ಳಲು ಉದ್ದೇಶಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1: ವಿಚಾರಣೆ-6:7:2002-03, ದಿನಾಂಕ: 13ನೇ ಆಗಸ್ಟ್, 2003**

ಈ ಕೆಳಗೆ ಸಹಿ ಮಾಡಿರುವ ಜಿ. ಪ್ರಕಾಶ್, ಕೃಷಿ ನಿರ್ದೇಶಕರಾದ ನಾನು ಪ್ರಸ್ತಾವನೆಯಲ್ಲಿರುವ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಪಿ.ಹೆಚ್. ಬನಸೋಡೆ, ಕೃಷಿ ಸಹಾಯಕ, ಕೃಷಿ ಅಧಿಕಾರಿಗಳು (ಡಿ.ಎಲ್.ಡಿ.ಬಿ.) ಕುಷ್ಟಗಿ ಇವರನ್ನು

ಆರೋಪಿ ಎಂದು ಪರಿಗಣಿಸಿ ಸಿಸಿಎ ನಿಯಮ 9(ಸಿ)ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (vi)ರನ್ವಯ ದಂಡನೆ ವಿಧಿಸಿ ಅವರನ್ನು ಅನಧಿಕೃತ ಗೈರು ಹಾಜರಿಯನ್ನು ಅನಧಿಕೃತ ಗೈರು ಹಾಜರಿ ಎಂದೇ ಪರಿಗಣಿಸಿ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ "ಕಡ್ಡಾಯ ನಿವೃತ್ತಿ" ಗೊಳಿಸಿ ಆದೇಶಿಸಿರುತ್ತೇನೆ.

**ಜಿ. ಪ್ರಕಾಶ್,**

ಪಿ.ಆರ್.982 ಕೃಷಿ ನಿರ್ದೇಶಕರು.

## ಸಕ್ಷಮ ಪ್ರಾಧಿಕಾರಿಯವರ ಕಛೇರಿ, ಮಂಗಳೂರು ಬೆಂಗಳೂರು ಪೈಪ್‌ಲೈನ್ ಪ್ರಾಜೆಕ್ಟ್, ಮಂಗಳೂರು

### ಅಧಿಸೂಚನೆ

**ನಂ. ಎಂ.ಬಿ.ಪಿ.ಎಲ್/1/99-2000, ದಿನಾಂಕ: 5ನೇ ಆಗಸ್ಟ್, 2002**

ಭಾರತ ಸರ್ಕಾರವು ಹೊರಡಿಸಿರುವ ಎಸ್.ಓ.1901 ದಿನಾಂಕ: 23.06.1999, ಎಸ್.ಓ. 53 ದಿನಾಂಕ: 10.01.01. ಎಸ್.ಓ. 952 ದಿನಾಂಕ: 04.05.01, ಎಸ್.ಓ. 3262 ದಿನಾಂಕ: 29.11.01 ಮತ್ತು ಎಸ್.ಓ. 3263 ದಿನಾಂಕ: 29.11.01 ಇತ್ಯಾದಿ ಅಧಿಸೂಚನೆಗಳಲ್ಲಿ ಮಂಗಳೂರು ಬೆಂಗಳೂರು ನಡುವೆ ಪೆಟ್ರೋಲಿಯಂ ಉತ್ಪನ್ನಗಳನ್ನು ಸಾಗಾಣಿಕೆ ಮಾಡುವ ಸಲುವಾಗಿ ಪೈಪ್‌ಲೈನ್ ಅಳವಡಿಸಲು ಭೂಬಳಕೆ ಹಕ್ಕನ್ನು ಸ್ವಾಧೀನಪಡಿಸಿಕೊಳ್ಳಲಾಗಿರುತ್ತದೆ.

ಪೈಪ್‌ಲೈನ್ ಅಳವಡಿಸುವ ಪ್ರಾಧಿಕಾರದವರಾದ ಮೆಸರ್ಸ್ ಪೆಟ್ರೋನೆಟ್ ಎಂ.ಹೆಚ್.ಬಿ. ಲಿಮಿಟೆಡ್‌ರವರು ಪತ್ರ ಸಂಖ್ಯೆ ಪಿ.ಎಂ.ಹೆಚ್.ಬಿ.ಎಲ್- ಇ-11 ದಿನಾಂಕ: 15.07.02, ಪಿ.ಎಂ.ಹೆಚ್.ಬಿ.ಎಲ್.ಇ-59 ದಿನಾಂಕ: 16.07.02, 26.07.02, ಹಾಗೂ ದಿನಾಂಕ: 31.07.02ರಲ್ಲಿ ಲಗತ್ತಿಸಿರುವ ಅನುಬಂಧದಲ್ಲಿ ವಿವರಿಸಲಾಗಿರುವ ಜಮೀನುಗಳಲ್ಲಿ ಪೈಪ್‌ಲೈನ್ ಅಳವಡಿಸುವ ಪ್ರಕ್ರಿಯೆ ಮುಕ್ತಾಯವಾಗಿರುತ್ತದೆಂದು ಹಾಗೂ ಈ ಜಮೀನುಗಳನ್ನು ಪೆಟ್ರೋಲಿಯಂ ಮತ್ತು ಖನಿಜಗಳ ಪೈಪ್‌ಲೈನ್ (ಭೂಬಳಕೆ ಹಕ್ಕು ಸ್ವಾಧೀನತೆ) ಕಾಯ್ದೆ 1962ರ ಕಲಂ 9ರಲ್ಲಿನ ಷರತ್ತುಗಳಿಗೆ ಒಳಪಡಿಸಿ ಭೂಬಳಕೆ ಹಕ್ಕು ಸ್ವಾಧೀನಕ್ಕೆ ಮುಂಚೆ ಇದ್ದಂತೆ ಸಾಗುವಳಿ ಕಾರ್ಯಗಳನ್ನು ನಿರ್ವಹಿಸಲು ಸಂಬಂಧಪಟ್ಟ ಭೂಮಾಲೀಕರಿಗೆ ಬಿಟ್ಟುಕೊಡಲಾಗಿದೆ, ಎಂದು ವರದಿ ಮಾಡಿರುತ್ತಾರೆ.

ಈ ಸಂದರ್ಭಗಳಲ್ಲಿ ಮೇಲೆ ತಿಳಿಸಿರುವ ಕಾಯ್ದೆಯ ಅಡಿಯಲ್ಲಿ ದತ್ತವಾಗಿರುವ ಅಧಿಕಾರದ ಮೇರೆಗೆ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ಜಮೀನುಗಳನ್ನು ಪೆಟ್ರೋಲಿಯಂ ಮತ್ತು ಖನಿಜಗಳ ಪೈಪ್‌ಲೈನ್ (ಭೂಬಳಕೆ ಹಕ್ಕು ಸ್ವಾಧೀನತೆ) ಕಾಯ್ದೆ 1962ರ ಕಲಂ 9ರಲ್ಲಿನ ಷರತ್ತುಗಳಿಗೆ ಒಳಪಡಿಸಿ ಸಂಬಂಧಪಟ್ಟ ಭೂಮಾಲೀಕರಿಗೆ ಸಾಗುವಳಿ ಮಾಡಲು ಬಿಟ್ಟುಕೊಡಲಾಗಿದೆ ಎಂದು ಘೋಷಿಸಲಾಗಿದೆ.

ಸಕ್ಷಮ ಪ್ರಾಧಿಕಾರಿ,
ಮಂಗಳೂರು ಬೆಂಗಳೂರು ಪೈಪ್‌ಲೈನ್
ಪ್ರಾಜೆಕ್ಟ್, ಮಂಗಳೂರು.

### ಅನುಬಂಧ

ರಾಜ್ಯ: ಕರ್ನಾಟಕ ಜಿಲ್ಲೆ: ದಕ್ಷಿಣ ಕನ್ನಡ

| ತಾಲ್ಲೂಕಿನ ಹೆಸರು | ಗ್ರಾಮದ ಹೆಸರು | ಸ.ನಂಬರ್ | ಹಿಸ್ಸಾ ನಂಬರ್ | ವಿಸ್ತೀರ್ಣ ಎ-ಸೆ |
|---|---|---|---|---|
| 1 | 2 | 3 | 4 | 5 |
| ಮಂಗಳೂರು | ತೋಕೂರು | 6 | 8 | 0-54 |
| | | 7 | 2 | 0-31 |
| | | 8 | 1 | 0-27 |
| | | 8 | 2B | 0-16 |
| | | 8 | 3 | 0-07 |
| | | 8 | 8 | 0-45 |
| | | 12 | 7 | 0-06 |
| | ಕೆಂಜಾರು | 163 | 2 | 0-08 |
| | | 163 | 8 | 0-27 |
| | | 163 | 4 | 0-31 |
| | | 163 | 6 | 0-27 |
| | | 160 | 2 | 0-89 |
| | | 159 | 4 | 0-24 |
| | | 159 | 3 | 0-01 |
| | | 151 | 3 | 0-28 |

| 1 | 2 | 3 | 4 | 5 |
|---|---|---|---|---|
| | ಕೆಂಜಾರು | 151 | 2 | 0-19 |
| | | 151 | 6 | 0-20 |
| | | 151 | 4 | 0-01 |
| | | 152 | 1 | 0-03 |
| | | 152 | 13 | 0-24 |
| | | 152 | 11 | 0-15 |
| | | 155 | 1 | 0-15 |
| | | 155 | 2 | 0-12 |
| | | 155 | 4 | 0-04 |
| | | 155 | 5 | 0-10 |
| | | 154 | 7C | 0-07 |
| | | 154 | 7D | 0-19 |
| | | 154 | 2 | 0-01 |
| | | 154 | 6 | 0-39 |
| | | 154 | 5 | 0-15 |
| | | 154 | 3 | 0-01 |
| | | 154 | 4 | 0-22 |
| | | 153 | 3 | 0-16 |
| | | 153 | 4 | 0-32 |
| | | 49 | 8 | 0-02 |
| | | 50 | 23 | 0-48 |
| | | 50 | 2 | 0-16 |
| | | 50 | 3A1 | 0-11 |
| | | 50 | 3B | 0-05 |
| | | 50 | 4A | 0-13 |
| | | 50 | 4B | 0-34 |
| | | 50 | 5 | 0-33 |
| | | 47 | 4 | 0-04 |
| | | 47 | 3 | 0-01 |
| | | 47 | 1 | 0-27 |
| | | 47 | 2 | 0-05 |
| | | 47 | 14B | 0-07 |
| | | 54 | 1A | 0-33 |
| | | 54 | 4 | 0-10 |
| | | 54 | 5 | 0-24 |
| | | 54 | 6 | 0-19 |
| | | 54 | 8 | 0-09 |
| | | 55 | 2 | 0-01 |
| | | 55 | 4A | 0-22 |
| | | 55 | 5A | 0-12 |
| | | 55 | 5B | 0-07 |
| | | 55 | 6 | 0-09 |
| | | 55 | 16 | 0-16 |
| | | 23 | 8A | 0-09 |
| | | 23 | 8B | 0-10 |

| 1 | 2 | 3 | 4 | 5 |
|---|---|---|---|---|
| | ಕೆಂಜಾರು | 23 | 12A | 0-06 |
| | | 23 | 12B | 0-02 |
| | | 23 | 10A | 0-05 |
| | | 23 | 15A | 0-02 |
| | | 23 | 15B | 0-04 |
| | | 23 | 11 | 0-09 |
| | | 23 | 14B | 0-05 |
| | | 23 | 13A | 0-08 |
| | | 23 | 13B | 0-10 |
| | | 76 | 5 | 0-22 |
| | | 76 | 8 | 0-36 |
| | | 76 | 9 | 0-02 |
| | | 77 | 1 | 0-25 |
| | | 77 | 7A | 0-04 |
| | | 80 | 1 | 0-30 |
| | | 80 | 2 | 0-18 |
| | | 80 | 3 | 0-10 |
| | | 80 | 4 | 0-03 |
| | | 80 | 5 | 0-16 |
| | | 80 | 6 | 0-13 |
| | | 81 | 1 | 0-32 |
| | | 81 | 2 | 0-02 |
| | | 82 | 1A | 0-68 |
| | | 82 | 2 | 0-06 |
| | | 82 | 3 | 0-01 |
| | | 82 | 5 | 0-11 |
| | | 83 | 1 | 0-10 |
| | | 83 | 3 | 0-18 |
| | | 83 | 12A1 | 0-17 |
| | | 102 | 8A | 0-08 |
| | | 102 | 12A | 0-28 |
| | | 102 | 12B | 0-12 |
| | | 102 | 13 | 0-62 |
| | | 102 | 16 | 0-43 |
| | | 104 | 5 | 0-35 |
| | | 104 | 6 | 0-05 |
| | ಮಳವೂರು | 17 | 1A | 0-06 |
| | | 17 | 2 | 0-05 |
| | | 17 | 3 | 0-05 |
| | | 17 | 5A1 | 0-02 |
| | | 17 | 5B | 0-01 |
| | | 17 | 6 | 0-03 |
| | | 15 | | 0-05 |
| | | 12 | 6A | 0-16 |
| | | 12 | 6B | 0-01 |

| 1 | 2 | 3 | 4 | 5 |
|---|---|---|---|---|
| | ಮಳವೂರು | 12 | 4A | 0-05 |
| | | 12 | 5B | 0-03 |
| | | 12 | 15B | 0-04 |
| | | 12 | 15A | 0-22 |
| | | 12 | 14 | 0-26 |
| | | 12 | 22 | 0-26 |
| | | 12 | 5A | 0-01 |
| | | 11 | 2A | 0-41 |
| | | 11 | 2B | 0-24 |
| | | 10 | 5 | 0-35 |
| | | 10 | 6 | 0-03 |
| | | 10 | 8 | 0-23 |
| | | 8 | 44B | 0-17 |
| | | 8 | 27 | 0-23 |
| | | 8 | 28A | 0-25 |
| | | 8 | 22A | 0-01 |
| | | 8 | 22B | 0-10 |
| | | 8 | 6C | 0-24 |
| | | 8 | 25 | 0-20 |
| | | 8 | 23 | 0-28 |
| | | 8 | 24A | 0-17 |
| | | 8 | 24B | 0-18 |
| | | 5 | 1B | 0-21 |
| | | 5 | 2A | 0-12 |
| | | 5 | 2B | 0-01 |
| | | 5 | 4 | 0-09 |
| | | 5 | 3A | 0-01 |
| | | 5 | 3B | 0-04 |
| | | 127 | 1 | 0-14 |
| | | 127 | 2 | 0-01 |
| | | 6 | 6A | 0-22 |
| | | 128 | 1 | 0-16 |
| | | 128 | 2 | 0-43 |
| | | 161 | 1 | 0-17 |
| | | 161 | 2 | 0-08 |
| | | 161 | 3B | 0-15 |
| | | 161 | 5 | 0-25 |
| | | 161 | 6A | 0-12 |
| | | 161 | 6B | 0-15 |
| | | 161 | 7 | 0-01 |
| | | 161 | 8 | 0-01 |
| | | 162 | 2A | 0-01 |
| | | 162 | 1 | 0-47 |
| | ಅದ್ಯಪ್ಪಾಡಿ | 84 | 5 | 0-06 |
| | | 64 | 1 | 0-16 |

| 1 | 2 | 3 | 4 | 5 |
|---|---|---|---|---|
| | ಅದ್ಯಪ್ಪಾಡಿ | 64 | 3 | 0-18 |
| | | 64 | 5 | 0-31 |
| | | 105 | 1A | 0-18 |
| | | 105 | 1B | 0-18 |
| | | 105 | 2 | 0-46 |
| | | 63 | 2B | 0-17 |
| | | 63 | 2A | 0-01 |
| | | 63 | 3 | 0-28 |
| | | 62 | 5B | 0-84 |
| | | 62 | 9C | 0-24 |
| | | 62 | 9D | 0-43 |
| | | 60 | 1 | 0-22 |
| | | 60 | 2 | 0-11 |
| | | 59 | 10A | 0-04 |
| | | 59 | 10B | 0-30 |
| | | 59 | 13 | 0-20 |
| | | 54 | 2 | 0-32 |
| | | 54 | 3 | 0-21 |
| | | 48 | 2 | 0-22 |
| | | 48 | 3 | 0-21 |
| | | 48 | 4 | 0-10 |
| | | 48 | 8 | 0-03 |
| | | 48 | 9 | 0-20 |
| | | 48 | 10 | 0-14 |
| | | 32 | 1 | 0-30 |
| | | 32 | 4 | 0-90 |
| | | 46 | 1 | 0-31 |
| | | 46 | 6 | 0-28 |
| | | 45 | 4 | 0-12 |
| | | 45 | 5 | 0-07 |
| | | 45 | 6A | 0-13 |
| | | 45 | 6B | 0-29 |
| | | 33 | 3 | 0-27 |
| | | 33 | 5 | 0-14 |
| | | 28 | 3 | 0-59 |
| | | 28 | 4 | 0-12 |
| | | 34 | 7 | 0-03 |
| | | 34 | 17 | 0-04 |
| | | 34 | 18A | 0-04 |
| | | 34 | 18B | 0-08 |
| | | 29 | 4 | 0-02 |
| | | 29 | 5 | 0-06 |
| | | 21 | 1 | 0-08 |
| | | 21 | 2 | 0-22 |
| | | 21 | 3 | 0-24 |

| 1 | 2 | 3 | 4 | 5 |
|---|---|---|---|---|
| | ಅದ್ಯಪ್ಪಾಡಿ | 21 | 10 | 0-50 |
| | | 21 | 4 | 0-04 |
| | | 21 | 5 | 0-01 |
| | | 20 | 1 | 0-15 |
| | | 20 | 2 | 0-17 |
| | | 20 | 3 | 0-12 |
| | | 18 | 1 | 0-32 |
| | | 18 | 4 | 0-15 |
| | | 18 | 6 | 0-22 |
| | | 11 | 7 | 0-84 |
| | | 12 | 1 | 0-35 |
| | | 12 | 2 | 0-13 |
| | | 13 | 6 | 0-40 |
| | | 13 | 8 | 0-03 |
| | | 13 | 9 | 0-02 |
| | | 13 | 10 | 0-98 |
| | | 9 | 2 | 0-51 |
| | | 9 | 8 | 0-27 |
| | ಕಂದಾವರ | 63 | 1 | 0-04 |
| | | 63 | 2 | 0-02 |
| | | 62 | 3 | 0-02 |
| | | 62 | 2 | 0-32 |
| | | 62 | 1 | 0-37 |
| | | 61 | 3 | 0-09 |
| | | 61 | 2 | 0-10 |
| | | 42 | 9 | 0-21 |
| | | 42 | 8 | 0-06 |
| | | 42 | 2C | 0-34 |
| | | 42 | 2B | 0-05 |
| | | 43 | 2 | 0-35 |
| | | 43 | 4 | 0-08 |
| | | 43 | 5 | 0-28 |
| | | 43 | 6 | 0-25 |
| | | 44 | 3B | 0-23 |
| | | 44 | 3A | 0-06 |
| | | 45 | 6 | 0-13 |
| | | 45 | 3 | 0-10 |
| | | 45 | 4 | 0-13 |
| | | 45 | 5 | 0-05 |
| | | 45 | 10 | 0-11 |
| | | 45 | 8 | 0-19 |
| | | 46 | 6 | 0-13 |
| | | 46 | 5 | 0-37 |
| | | 46 | 2 | 0-13 |
| | | 47 | 1 | 0-16 |

| 1 | 2 | 3 | 4 | 5 |
|---|---|---|---|---|
| | ಕಂದಾವರ | 47 | 2 | 0-33 |
| | | 47 | 6 | 0-51 |
| | | 47 | 4 | 0-03 |
| | | 48 | 1 | 0-45 |
| | | 48 | 5 | 0-23 |
| | | 50 | 2A | 0-41 |
| | | 50 | 2B | 0-35 |
| | | 50 | 3 | 0-21 |
| | | 50 | 4 | 0-16 |
| | | 23 | 3 | 0-02 |
| | | 23 | 04 | 0-19 |
| | | 22 | 3 | 0-46 |
| | | 22 | 8 | 0-01 |
| | | 22 | 11 | 0-10 |
| | | 105 | 1A | 0-20 |
| | | 105 | 1B | 0-03 |
| | | 130 | 3 | 0-35 |
| | | 131 | | 0-93 |
| | | 132 | 2 | 1-15 |
| | | 88 | 5 | 0-27 |
| | | 20 | 3 | 0-40 |
| | | 20 | 1 | 0-56 |
| | | 20 | 4 | 0-97 |
| | | 18 | D | 0-30 |
| | | 109 | 2 | 0-03 |
| | | 109 | 3B | 0-18 |
| | ಮೂಳೂರು | 7 | 1A1 | 0-20 |
| | | 7 | 1D1 | 0-15 |
| | | 7 | 1D2 | 0-05 |
| | | 7 | 1D3 | 0-10 |
| | | 7 | 1D4 | 0-01 |
| | | 7 | 2 | 0-24 |
| | | 8 | 1 | 0-27 |
| | | 100 | 4 | 0-90 |
| | | 100 | 2 | 1-15 |
| | | 100 | 3 | 0-02 |
| | | 100 | 1 | 0-02 |
| | | 95 | | 0-01 |
| | | 14 | 1 | 0-02 |
| | ಬಡಗಉಳಿಪಾಡಿ | 209 | 1 | 0-15 |
| | | 53 | 1 | 0-15 |
| | | 53 | 2 | 0-17 |
| | | 53 | 3 | 0-10 |
| | | 159 | 1 | 0-27 |
| | | 207 | 2 | 0-81 |

| 1 | 2 | 3 | 4 | 5 |
|---|---|---|---|---|
| | ಬಡಗಉಳಿಪಾಡಿ | 208 | 1B | 0-39 |
| | | 208 | 2 | 0-60 |
| | | 208 | 3 | 0-64 |
| | | 51 | 9C | 0-46 |
| | | 51 | 22 | 0-02 |
| | | 52 | 1 | 0-38 |
| | | 32 | 15 | 0-52 |
| | | 32 | 14 | 0-07 |
| | | 32 | 13 | 0-02 |
| | | 32 | 16 | 0-21 |
| | | 32 | 4 | 0-01 |
| | | 31 | 7 | 0-03 |
| | | 31 | 4 | 0-14 |
| | | 31 | 5 | 0-09 |
| | | 31 | 1 | 0-15 |
| | | 30 | 1 | 0-25 |
| | | 29 | 6 | 0-13 |
| | | 29 | 5 | 0-39 |
| | | 29 | 2 | 0-11 |
| | | 29 | 3 | 0-24 |
| | | 29 | 1 | 0-01 |
| | | 28 | 5 | 0-02 |
| | | 28 | 1 | 0-01 |
| | | 27 | 11 | 0-06 |
| | | 27 | 12 | 0-17 |
| | | 27 | 9 | 0-19 |
| | | 27 | 10 | 0-24 |
| | | 26 | 6 | 0-17 |
| | | 26 | 5A | 0-20 |
| | | 26 | 5B | 0-08 |
| | | 26 | 2 | 0-30 |
| | | 26 | 1 | 0-37 |
| | | 26 | 3 | 0-05 |
| | | 26 | 4 | 0-01 |
| | | 21 | 8 | 0-45 |
| | | 21 | 16 | 0-08 |
| | | 21 | 4 | 0-24 |
| | | 21 | 10A | 0-24 |
| | | 21 | 1 | 0-75 |
| | | 3 | 17 | 1-76 |
| | | 3 | 20 | 0-33 |
| | | 3 | 6 | 0-22 |
| | | 1 | 15 | 0-23 |
| | | 1 | 11 | 0-12 |

| 1 | 2 | 3 | 4 | 5 |
|---|---|---|---|---|
| | ಮೊಗರು | 43 | 3 | 1-20 |
| | | 43 | 7 | 0-30 |
| | | 43 | 5 | 0-02 |
| | | 41 | 6 | 0-72 |
| | | 40 | 11 | 0-13 |
| | | 40 | 10 | 0-26 |
| | | 40 | 8 | 0-03 |
| | | 38 | | 0-45 |
| | | 39 | 1 | 0-50 |
| | | 39 | 2 | 0-46 |
| | | 28 | 7 | 0-19 |
| | | 28 | 5 | 0-01 |
| | | 27 | 1 | 0-04 |
| | | 27 | 6 | 0-91 |
| | | 27 | 4 | 0-19 |
| | | 27 | 5 | 0-13 |
| | | 51 | | 0-29 |
| ಬಂಟ್ವಾಳ | ಕರಿಯಂಗಳ | 7 | | 0-47 |
| | | 6 | 1 | 0-76 |
| | | 5 | 1A | 0-29 |
| | | 5 | 1B | 0-25 |
| | | 4 | 3 | 0-49 |
| | | 4 | 2 | 0-26 |
| | | 4 | 10 | 0-03 |
| | | 3 | 15E | 0-08 |
| | | 3 | 5 | 0-01 |
| | | 3 | 15F | 0-27 |
| | | 3 | 2 | 0-32 |
| | | 3 | 3 | 0-17 |
| | | 3 | 1C | 0-04 |
| | | 3 | 14 | 0-07 |
| | | 2 | 2 | 0-60 |
| | | 2 | 5 | 0-02 |
| | ಬಡಗಬೆಳ್ಳೂರು | 86 | 23 | 0-60 |
| | | 86 | 11 | 0-35 |
| | | 86 | 10 | 0-20 |
| | | 86 | 24 | 0-13 |
| | | 86 | 6 | 0-77 |
| | | 86 | 22 | 0-45 |
| | | 76 | 1A | 0-23 |
| | | 72 | 2A | 0-49 |
| | | 72 | 8 | 0-08 |
| | | 72 | 7 | 0-04 |
| | | 72 | 2B | 0-98 |
| | | 72 | 3 | 0-29 |

| 1 | 2 | 3 | 4 | 5 |
|---|---|---|---|---|
| | ಬಡಗಬೆಳ್ಳೂರು | 72 | 11 | 0-70 |
| | | 72 | 10 | 1-47 |
| | | 169 | | 0-62 |
| | | 163 | 3 | 0-19 |
| | | 170 | 1 | 0-42 |
| | | 170 | 2 | 0-01 |
| | | 101 | | 0-20 |
| | | 56 | 3 | 0-18 |
| | | 51 | 3 | 0-10 |
| | | 51 | 1 | 0-68 |
| | | 52 | 8 | 0-04 |
| | | 52 | 7 | 0-02 |
| | | 54 | 2 | 0-01 |
| | | 53 | 9 | 0-22 |
| | | 53 | 2 | 0-58 |
| | | 53 | 5 | 0-14 |
| | | 53 | 4 | 0-05 |
| | | 53 | 3 | 0-23 |
| | | 47 | | 0-17 |
| | | 35 | 12 | 0-99 |
| | | 42 | 21 | 0-12 |
| | | 42 | 30 | 0-06 |
| | | 42 | 9 | 1-15 |
| | | 41 | 2 | 0-49 |
| | | 216 | | 1-20 |
| | | 208 | 2 | 0-37 |
| | | 155 | 1 | 0-16 |
| | | 155 | 2 | 0-45 |
| | | 155 | 3 | 0-19 |
| | ಆರ್ಲ | 198 | 4 | 0-01 |
| | | 198 | 5 | 0-60 |
| | | 198 | 6 | 0-38 |
| | | 198 | 7 | 0-44 |
| | | 193 | 3 | 0-97 |
| | | 194 | | 0-46 |
| | | 196 | 1 | 1-07 |
| | | 196 | 2 | 0-37 |
| | | 115 | 1 | 0-26 |
| | | 166 | 1A | 0-35 |
| | | 166 | 1B | 0-22 |
| | | 185 | 2 | 0-39 |
| | | 185 | 4 | 0-17 |
| | | 189 | 2 | 0-44 |
| | | 189 | 3 | 0-41 |
| | | 188 | 1 | 0-06 |

| 1 | 2 | 3 | 4 | 5 |
|---|---|---|---|---|
| | ಆರ್ಲ | 188 | 2 | 0-67 |
| | | 188 | 3 | 0-33 |
| | | 187 | 2 | 0-59 |
| | | 111 | | 0-77 |
| | | 136 | 1 | 0-24 |
| | | 136 | 2A | 0-42 |
| | | 136 | 2C | 0-41 |
| | | 137 | 1 | 0-55 |
| | | 137 | 2A1 | 0-18 |
| | | 139 | 1 | 0-80 |
| | | 140 | | 0-77 |
| | | 141 | | 0-34 |
| | | 86 | 2 | 2-27 |
| | | 96 | 1 | 0-55 |
| | | 96 | 2A | 0-51 |
| | | 67 | 1 | 0-17 |
| | | 181 | 1 | 0-81 |
| | | 181 | 2 | 0-14 |
| | | 186 | 1 | 0-58 |
| | | 186 | 2 | 0-41 |
| | | 215 | 1 | 0-93 |
| | ಪಂಜಿಕಲ್ಲು | 65 | 1 | 0-06 |
| | | 65 | 2 | 0-09 |
| | | 64 | 2A3 | 0-15 |
| | | 64 | 2A1 | 0-11 |
| | | 64 | 2B | 0-02 |
| | | 64 | 2A4 | 0-01 |
| | | 64 | 2A2 | 0-26 |
| | | 64 | 2C | 0-05 |
| | | 64 | 2D | 0-10 |
| | | 64 | 3A3 | 0-07 |
| | | 64 | 3A2 | 0-05 |
| | | 64 | 3C | 0-07 |
| | | 64 | 3D | 0-04 |
| | | 64 | 3A1 | 0-01 |
| | | 64 | 3A4 | 0-06 |
| | | 64 | 3A5 | 0-06 |
| | | 64 | 4A3 | 0-11 |
| | | 64 | 4A4 | 0-01 |
| | | 87 | | 7-80 |
| | | 161 | 1 | 0-37 |
| | | 217 | 1 | 0-71 |
| | | 157 | 1 | 0-89 |
| | | 157 | 2 | 0-22 |
| | | 19 | 1 | 0-21 |

| 1 | 2 | 3 | 4 | 5 |
|---|---|---|---|---|
| | ಪಂಜಿಕಲ್ಲು | 19 | 3 | 0-06 |
| | | 137 | 3A1 | 0-20 |
| | | 137 | 3A2 | 0-06 |
| | | 18 | 9 | 0-14 |
| | | 18 | 8 | 0-10 |
| | | 18 | 7 | 0-41 |
| | | 18 | 21 | 0-29 |
| | | 123 | | 0-15 |
| | | 113 | | 3-21 |
| | | 280 | 1 | 0-20 |
| | | 280 | 2 | 0-53 |
| | | 266 | 3 | 0-39 |
| | | 209 | 1 | 0-64 |
| | | 209 | 2 | 0-12 |
| | | 183 | 1 | 0-29 |
| | | 159 | 1 | 0-33 |
| | ಮೂಡನಡುಗೋಡು | 74 | 13 | 4-43 |
| | | 24 | | 0-20 |
| | | 76 | 1A | 0-42 |
| | | 76 | 2A | 0-17 |
| | | 76 | 2B | 0-22 |
| | | 76 | 2C | 0-28 |
| | | 76 | 3 | 0-07 |
| | | 142 | 1A | 0-06 |
| | | 142 | 1B | 1-07 |
| | | 150 | 1 | 0-27 |
| | | 150 | 2 | 0-13 |
| | | 100 | 1 | 0-34 |
| | | 92 | 1 | 0-22 |
| | ಕಾಡಬೆಟ್ಟು | 61 | 2 | 7-36 |
| | | 29 | 1 | 0-25 |
| | | 31 | | 0-18 |
| | | 77 | 1A | 2-61 |
| | | 84 | 1 | 0-86 |
| | | 84 | 2A | 0-11 |
| | | 105 | 1 | 1-27 |
| | | 6 | 2 | 0-22 |
| | | 4 | 2 | 1-67 |
| | | 57 | 1 | 0-14 |
| | | 57 | 2 | 0-02 |
| | ಮೂಡಪಡುಕೋಡಿ | 13 | 2 | 3-12 |
| | | 124 | 1 | 1-16 |
| | | 10 | | 0-10 |
| | ಕಾವಳಪಡೂರು | 8 | 2A | 1-91 |
| | | 7 | 1 | 0-88 |

| 1 | 2 | 3 | 4 | 5 |
|---|---|---|---|---|
| | ಕಾವಳಪಡೂರು | 187 | 2 | 0-42 |
| | | 187 | 1 | 0-02 |
| | | 187 | 3 | 0-36 |
| | | 201 | 2 | 0-62 |
| | | 6 | 1A2B | 0-01 |
| | | 6 | 1A2C | 0-82 |
| | | 16 | 1 | 0-10 |
| | | 16 | 2 | 0-48 |
| | | 16 | 3 | 37 |
| | | 16 | 4 | 0-02 |
| | | 15 | 9 | 0-31 |
| | | 17 | 2 | 0-91 |
| | ಕಾವಳಮುಡೂರು | 3 | 2B1 | 2-05 |
| | | 2 | 15A | 1-24 |
| | | 2 | 15C | 0-39 |
| | | 2 | 16 | 0-04 |
| | | 2 | 17 | 0-13 |
| | | 4 | 1 | 0-02 |
| | | 175 | | 0-31 |
| | | 99 | | 0-27 |
| | | 9 | | 0-03 |
| | | 10 | | 1-65 |
| | | 11 | 8B | 0-84 |
| | | 171 | 4 | 2-29 |
| | | 195 | 1A | 0-97 |
| | | 79 | 4A | 0-22 |
| | | 79 | 8B | 0-44 |
| | | 79 | 4B | 0-02 |
| | | 79 | 9 | 0-12 |
| | | 184 | 1A | 0-34 |
| | | 184 | 2 | 0-92 |
| | | 178 | 5 | 0-02 |
| | | 256 | 2 | 0-02 |
| ಬೆಳ್ತಂಗಡಿ | ಕುಕ್ಕಳ | 63 | 1 | 1-58 |
| | | 142 | 1 | 0-12 |
| | | 143 | 1 | 0-87 |
| | | 48 | 1 | 2-93 |
| | | 19 | 3 | 0-17 |
| | | 19 | 4 | 0-38 |
| | | 157 | 1 | 1-20 |
| | | 123 | 2B | 0-63 |
| | | 18 | 1A | 0-06 |
| | | 18 | 1B | 0-23 |
| | | 17 | 20 | 0-15 |
| | | 60 | 1 | 3-18 |

| 1 | 2 | 3 | 4 | 5 |
|---|---|---|---|---|
| | ಕುಕ್ಕಳ | 59 | 2A | 0-27 |
| | | 32 | 4A | 0-32 |
| | | 159 | 2 | 0-35 |
| | ಪಾರೆಂಕಿ | 27 | 1 | 2-13 |
| | | 25 | 2B | 0-20 |
| | | 25 | 6 | 0-13 |
| | | 183 | | 0-65 |
| | | 32 | 4 | 0-19 |
| | | 32 | 2 | 0-23 |
| | | 32 | 3 | 0-02 |
| | | 168 | 1 | 2-66 |
| | | 39 | 8 | 0-35 |
| | | 39 | 9A | 0-03 |
| | | 39 | 10 | 0-20 |
| | | 65 | 1 | 0-35 |
| | | 65 | 2 | 0-21 |
| | | 171 | 7A1 | 0-22 |
| | | 171 | 1B | 0-15 |
| | | 171 | 1C | 0-04 |
| | | 171 | 3 | 0-05 |
| | | 171 | 7A2 | 0-04 |
| | | 171 | 6 | 0-14 |
| | | 45 | 8 | 0-35 |
| | | 94 | 1 | 0-64 |
| | | 88 | 1 | 3-65 |
| | | 96 | 3 | 0-57 |
| | | 154 | | 0-10 |
| | | 100 | 1 | 1-53 |
| | ಮಚ್ಚಿನ | 317 | 3 | 1-15 |
| | | 317 | 4 | 0-85 |
| | | 34 | 7 | 0-25 |
| | | 34 | 8 | 0-25 |
| | | 34 | 3A | 0-10 |
| | | 34 | 10B | 0-01 |
| | | 34 | 11B | 0-33 |
| | | 34 | 12 | 0-53 |
| | | 34 | 5 | 0-05 |
| | | 37 | A1C1 | 0-02 |
| | | 37 | A1C2 | 0-11 |
| | | 37 | A1C3 | 0-10 |
| | | 38 | 4 | 0-02 |
| | | 38 | 1A | 0-36 |
| | | 38 | 1B | 31 |
| | | 38 | 8 | 0-10 |
| | | 38 | 14 | 0-05 |

| 1 | 2 | 3 | 4 | 5 |
|---|---|---|---|---|
| | ಮಚ್ಚಿನ | 38 | 2 | 0-05 |
| | | 38 | 5 | 0-01 |
| | | 38 | 6 | 0-04 |
| | | 38 | 10 | 0-04 |
| | | 38 | 12 | 0-15 |
| | | 39 | 1 | 0-18 |
| | | 39 | 2 | 0-32 |
| | | 30 | 1 | 0-06 |
| | | 30 | 3 | 0-04 |
| | | 30 | 8 | 0-16 |
| | | 215 | 1 | 1-05 |
| | | 215 | 2 | 0-02 |
| | | 32 | 1 | 0-37 |
| | | 51 | 1A | 0-52 |
| | | 51 | 1B | 0-16 |
| | | 51 | 4 | 0-32 |
| | | 75 | 6 | 0-13 |
| | | 75 | 13B2 | 0-16 |
| | | 294 | 2 | 0-41 |
| | | 199 | 1 | 9-50 |
| | | 196 | 2A1 | 0-04 |
| | | 376 | 1 | 0-15 |
| | | 376 | 2 | 0-28 |
| | | 376 | 3 | 0-18 |
| | | 340 | 1 | 1-20 |
| | ಒಡಿಲ್ನಾಲ್ | 6 | | 7-20 |
| | | 2 | 1 | 0-02 |
| | | 2 | 6 | 0-26 |
| | | 2 | 2 | 0-04 |
| | | 2 | 3 | 0-02 |
| | | 2 | 4 | 0-02 |
| | | 3 | 18A | 0-05 |
| | | 3 | 19 | 0-02 |
| | | 3 | 20 | 0-52 |
| | ಕಳಿಯ | 135 | 1 | 0-71 |
| | | 134 | 1C | 0-10 |
| | | 134 | 2 | 0-26 |
| | | 134 | 1A | 0-01 |
| | | 134 | 1B | 0-28 |
| | | 132 | 12A | 0-31 |
| | | 133 | 1A | 0-76 |
| | | 133 | 2 | 0-21 |
| | | 130 | 1 | 0-18 |
| | | 169 | 1A | 1-34 |
| | | 246 | 2A1 | 0-82 |

| 1 | 2 | 3 | 4 | 5 |
|---|---|---|---|---|
| | ಕಳಿಯ | 117 | 1 | 0-20 |
| | | 255 | 2A | 0-86 |
| | | 205 | 1B | 0-54 |
| | | 205 | 2B | 0-09 |
| | | 205 | 3B | 0-56 |
| | | 167 | 1 | 0-30 |
| | | 173 | 1A | 1-85 |
| | | 83 | 9 | 0-13 |
| | | 83 | 10 | 0-09 |
| | | 187 | 1A1 | 0-33 |
| | | 80 | 1 | 0-85 |
| | | 214 | 1A1 | 0-30 |
| | | 65 | 1C | 1-17 |
| | | 65 | 3A | 0-45 |
| | | 65 | 3B | 0-07 |
| | | 65 | 4 | 0-74 |
| | | 160 | 1 | 0-06 |
| | | 67 | 4 | 0-11 |
| | ಕೊಯ್ಯೂರು | 60 | | 4-32 |
| | | 92 | 1 | 0-52 |
| | | 92 | | 1-03 |
| | | 91 | 1A3 | 0-76 |
| | | 88 | 1 | 0-96 |
| | | 84 | | 2-90 |
| | | 183 | 1 | 1-35 |
| | | 75 | 10 | 0-76 |
| | | 73 | 1 | 0-32 |
| | | 182 | | 2-52 |
| | | 252 | | 0-88 |
| | | 172 | 1 | 0-34 |
| | ಬೆಳಾಲ್ | 256 | | 1-16 |
| | | 306 | 1 | 0-14 |
| | | 306 | 2 | 0-11 |
| | | 250 | 2 | 0-87 |
| | | 11 | 1A | 0-46 |
| | | 7 | 1 | 0-80 |
| | ಉಜ್ರೆ | 318 | 11 | 0-29 |
| | | 316 | 2B | 0-22 |
| | | 316 | 3A | 0-44 |
| | | 324 | 5 | 0-68 |
| | | 324 | 9 | 0-22 |
| | | 312 | 3 | 0-11 |
| | | 312 | 5 | 0-29 |
| | | 561 | 2 | 0-34 |

| 1 | 2 | 3 | 4 | 5 |
|---|---|---|---|---|
| | ಧರ್ಮಸ್ಥಳ | 1 | 1 | 0-50 |
| | | 1 | 3 | 0-13 |
| | | 18 | 1 | 0-50 |
| | | 19 | 1 | 0-21 |
| | | 19 | 2 | 0-40 |
| | | 24 | 2A2 | 0-02 |
| | | 24 | 4 | 0-20 |
| | | 21 | 2B | 0-06 |
| | | 21 | 3 | 0-15 |
| | | 21 | 4A | 0-30 |
| | | 21 | 4B | 0-52 |
| | | 21 | 7 | 0-50 |
| | | 21 | 8A | 0-56 |
| | | 21 | 9 | 0-13 |
| | | 33 | 1 | 0-17 |
| | | 37 | 3 | 0-32 |
| | | 37 | 4 | 0-34 |
| | | 36 | 2 | 0-42 |
| | | 36 | 4 | 0-04 |
| | | 36 | 5 | 0-19 |
| | | 76 | 2 | 0-02 |
| | | 76 | 5 | 0-02 |
| | | 76 | 6 | 0-24 |
| | | 76 | 7 | 0-29 |
| | | 76 | 8 | 0-91 |
| | | 76 | 9 | 0-04 |
| | | 76 | 11 | 0-06 |
| | | 79 | 2A | 0-82 |
| | | 79 | 3A | 0-66 |
| | | 267 | 1A | 1-05 |
| | | 267 | 1C | 0-22 |
| | | 84 | 1 | 0-23 |
| | | 84 | 2A | 0-47 |
| | | 84 | 2B | 0-32 |
| | | 182 | 1 | 1-02 |
| | | 298 | 2 | 0-07 |
| | | 164 | 2A | 0-07 |
| | | 162 | 3A | 0-06 |
| | | 162 | 3B | 0-06 |
| | | 162 | 3C | 0-01 |
| | | 162 | 3 | 0-08 |
| | | 161 | 1A | 2-21 |
| | | 161 | 1B | 1-01 |
| | | 155 | 1 | 0-65 |
| | | 155 | 2 | 0-14 |

| 1 | 2 | 3 | 4 | 5 |
|---|---|---|---|---|
| | ಧರ್ಮಸ್ಥಳ | 155 | 3 | 0-01 |
| | | 306 | 3A | 0-43 |
| | | 306 | 3B | 0-37 |
| | | 306 | 4 | 0-06 |
| | | 297 | 4A3 | 0-07 |
| | ಪುದುವೆಟ್ಟು | 233 | 1 | 0-99 |
| | | 227 | | 0-38 |
| | | 226 | | 1-20 |
| | | 127 | 1C | 1-73 |
| | | 123 | | 1-04 |
| | | 124 | 3 | 0-27 |
| | | 122 | 1 | 1-09 |
| | | 121 | | 0-64 |
| | | 125 | 1 | 0-17 |
| | | 120 | | 0-38 |
| | | 171 | 4 | 0-27 |
| | | 169 | | 1-05 |
| | | 170 | 1 | 0-01 |
| | | 170 | 10 | 0-10 |
| | ನೆರಿಯಾ | 144 | | 0-50 |
| | | 69 | | 0-25 |
| | | 71 | 4B | 0-13 |
| | | 71 | 3 | 0-32 |
| | | 71 | 8 | 0-36 |
| | | 70 | 1A | 0-91 |
| | | 70 | 2 | 0-34 |
| | | 77 | 3 | 0-70 |
| | | 146 | | 62-00 |

ಸಕ್ಷಮ ಪ್ರಾಧಿಕಾರಿ,

ಪಿ.ಆರ್.983 ಮಂಗಳೂರು ಬೆಂಗಳೂರು ಪೈಪ್‌ಲೈನ್ ಪ್ರಾಜೆಕ್ಟ್, ಮಂಗಳೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ನ್ಯಾಯಾಲಯದಲ್ಲಿನ ನಡವಳಿಗಳು**

**ವಿಷಯ:** ಪಾವಗಡ ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ವೆಂಕಟಾಪುರ ಇದರ ಮಾಜಿ ಕಾರ್ಯದರ್ಶಿ, ಶ್ರೀ ಟಿ. ಆಂಜನಪ್ಪ ಇವರು ಸಂಘದ ಹಣ ರೂ. 1381232-54ಗಳು ದುರುಪಯೋಗದ ಬಗ್ಗೆ ಹಣದ ಭದ್ರತೆಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅಡಿಯಲ್ಲಿ ತೀರ್ಪು ಮುನ್ನ ಜಪ್ತಿ ಆದೇಶ.

**ಉಲ್ಲೇಖ:** ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ ವೆಂಕಟಾಪುರ, ಪಾವಗಡ ತಾಲ್ಲೂಕು ಇವರ ಅರ್ಜಿ ದಿನಾಂಕ: 28.7.2003.

**ಪ್ರಸ್ತಾವನೆ:**

ಶ್ರೀ ಟಿ. ಆಂಜನಪ್ಪ, ಮಾಜಿ ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ವೆಂಕಟಾಪುರ, ಪಾವಗಡ ತಾಲ್ಲೂಕು ಇವರು ಸದರಿ ಸಂಘದಲ್ಲಿ ರೂ. 1381232-54ಗಳ ಹಣ ದುರುಪಯೋಗ ಪಡಿಸಿರುವುದಾಗಿ 1989-90 ರಿಂದ 2001-02ನೇ ಸಾಲುಗಳ ಆಡಿಟ್ ವರದಿಗಳಲ್ಲಿ ದೃಢಪಟ್ಟಿದ್ದು, ಈ ಹಣ ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳ ವಸೂಲಾತಿಗೆ ಸಂಘದ ಹಾಲಿ ಕಾರ್ಯದರ್ಶಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಅಡಿಯಲ್ಲಿ ಅಧಿಭಾರ ಅರ್ಜಿಯನ್ನು ದಿನಾಂಕ: 28.7.2003ರಂದು ಹೂಡಿರುತ್ತಾರೆ. ಈ ದಾವೆಯನ್ನು ದಿನಾಂಕ: 31.7.2003ರಂದು ಕಡತದಲ್ಲಿ ದಾಖಲಿಸಿಕೊಂಡು ದಿನಾಂಕ: 23.8.2003ರಿಂದ ವಿಚಾರಣೆ ಪ್ರಾರಂಭಿಸಲು ಉಭಯತ್ರರಿಗೂ ನೋಟೀಸ್ ಜಾರಿ ಮಾಡಿಸಿರುತ್ತದೆ. ಅರ್ಜಿದಾರ ಸಂಘವು ಉಲ್ಲೇಖಿತ ಪತ್ರದ ಅನ್ವಯ ಶ್ರೀ ಟಿ. ಆಂಜನಪ್ಪ ಇವರು ದುರುಪಯೋಗ ಪಡಿಸಿರುವ ಹಣ ರೂ. 1381232-54ಗಳ ವಸೂಲಾತಿ ಕುರಿತು ಪ್ರತಿವಾದಿ ಮತ್ತು ಅವರ ಸಹೋದರರ ಹೆಸರಿನಲ್ಲಿರುವ ಷೆಡ್ಯೂಲ್ ಆಸ್ತಿಯನ್ನು ದುರುದ್ದೇಶದಿಂದ ಬೇರೆಯವರಿಗೆ ವರ್ಗಾವಣೆ ಅಥವಾ ಪರಭಾರೆ ಮಾಡುವುದರ

ಮೂಲಕ ದುರುಪಯೋಗದ ಹಣ ಪಾವತಿಸುವಲ್ಲಿ ತನ್ನ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳಬಹುದು ಎಂದು ಶಂಕಿಸಿ ಸಹಕಾರ ಕಾಯ್ದೆ ಕಲಂ 103ರ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಾ ಕಲಂ 69ರ ಅಧಿಭಾರ ಅರ್ಜಿ ವಿಚಾರಣಾ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ. ಈ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಅಧಿಭಾರ ಅರ್ಜಿ ದಾವೆ ನಂ.11:2003-04ರ ಅಂತಿಮ ತೀರ್ಪು ಕಾದಿರಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅನ್ವಯ ಈ ನ್ಯಾಯಾಲಯದ ದಾವೆಯ ಐ ತೀರ್ಪು ಪೂರ್ವ ಷೆಡ್ಯೂಲ್ ಆಸ್ತಿಯನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಜಪ್ತಿ ಆದೇಶ**

**ನಂ. ಸಸಂಸನಿ-33:ಎಬಿಎನ್:ಡಿಡಿಎಸ್: 27:2003-04, ದಿನಾಂಕ: 2ನೇ ಆಗಸ್ಟ್, 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ಶ್ರೀ ಟಿ. ಮುರಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಟಿ. ಆಂಜನಪ್ಪ, ಮಾಜಿ ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ವೆಂಕಟಾಪುರ, ಪಾವಗಡ ತಾಲ್ಲೂಕು ಇವರ ಮತ್ತು ಅವರ ಸಹೋದರರಾದ ಶ್ರೀ ವೆಂಕಟರಮಣಪ್ಪ ಬಿನ್ ತಿಮ್ಮಯ್ಯ ಮತ್ತು ಸಂಜೀವಪ್ಪ ಬಿನ್ ತಿಮ್ಮಯ್ಯ, ಜೋಡರಹಳ್ಳಿ, ದೊಮ್ಮತಮರಿ ಅಂಚೆ, ಕಸಬಾ ಹೋಬಳಿ, ಪಾವಗಡ ತಾಲ್ಲೂಕು ಇವರ ಹೆಸರಿನಲ್ಲಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಟಿ. ಆಂಜನಪ್ಪ, ವೆಂಕಟರಮಣಪ್ಪ ಮತ್ತು ಸಂಜೀವಪ್ಪ ಇವರು ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತಿಗೆ ತತ್ಸಮಾನವಾದ ನಗದು ಭದ್ರತೆ ನೀಡುವವರೆಗೆ ವಿಲೇವಾರಿ ಮಾಡುವುದೇ ಆಗಲೀ ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲೀ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ, ಯಾರಾದರೂ ಈ ಸ್ವತ್ತುಗಳನ್ನು ಖರೀದಿಸಿದಲ್ಲಿ, ಪರಭಾರೆ ಮಾಡಿದಲ್ಲಿ ಅಥವಾ ಇನ್ನು ಯಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗುವುದಿಲ್ಲವೆಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 6.9.2003ರ ಒಳಗೆ ಈ ನ್ಯಾಯಾಲಯಕ್ಕೆ ಹಾಜರು ಪಡಿಸುವುದರ ಮೂಲಕ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

**ಷೆಡ್ಯೂಲ್**

| ಕ್ರ. ಸಂ. | ಖಾತೆದಾರರ ಹೆಸರು: ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1) | ಟಿ. ಆಂಜನಪ್ಪ, ವೆಂಕಟರಮಣಪ್ಪ, ಸಂಜೀವಪ್ಪ ಬಿನ್ ತಿಮ್ಮಯ್ಯ ಬೋಡೇರಹಳ್ಳಿ, ದೊಮ್ಮತಮರಿ ಅಂಚೆ, ಪಾವಗಡ ತಾಲ್ಲೂಕು. | 184 | 109 | 42-34 ಎಕರೆ | ಖುಷ್ಕಿ | **ಪೂರ್ವ:** ಅಶ್ವತ್ಥನಾರಾಯಣ, ಓಬಳಪ್ಪನ ಜಮೀನು. **ಪಶ್ಚಿಮ:** ಯರ್ರಪ್ಪ ಜಗ್ಗಪ್ಪ, 108 ಸರ್ವೆ ನಂಬರ್ **ಉತ್ತರ:** ರಾಮಚಂದ್ರ ರಾಜು ಜಮೀನು **ದಕ್ಷಿಣ:** ಕುರುಬ ಹನುಮಂತರಾಯಪ್ಪ ಜಮೀನು. |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 02.08.2003 ರಂದು ನೀಡಿರುತ್ತೇನೆ.

**ಟಿ. ಮುರಳಿಕೃಷ್ಣಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪ-ವಿಭಾಗ, ಮಧುಗಿರಿ.

ಪಿ.ಆರ್.984

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ಪ್ರಕಟಣೆ**

**ಸಂಖ್ಯೆ: ಬಿ1-71ಎ-ಸಿಆರ್:1/2003-04, ದಿನಾಂಕ: 12ನೇ ಆಗಸ್ಟ್, 2003**

**ವಿಷಯ:** ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಎ ಯಿಂದ 71ಜಿ ಯವರೆಗೆ ಅನುಗುಣವಾಗಿ ಈ ನ್ಯಾಯಾಲಯದಲ್ಲಿ ನಡವಳಿಕೆಗಳನ್ನು ನಡೆಸಿ, ದಿನಾಂಕ: 11.06.2003ರಂದು ಆದೇಶ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳ ಮತ್ತು ಶ್ರೀಗಂಧದ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆ ರುಜುವಾತುಪಡಿಸಲು ಅಪೇಕ್ಷಿಸಿದ ವ್ಯಕ್ತಿಯು ಮೇಲ್ಕಂಡ ಪ್ರಕಟಣೆಯ ಮೂವತ್ತು ದಿನಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ಅವರ ಹಕ್ಕು ಬಾಧ್ಯತೆ ಮತ್ತು ಮಾಲೀಕತ್ವವನ್ನು ರುಜುವಾತುಪಡಿಸಲು ತಿಳಿಸಲಾಗಿತ್ತು. ಸದರಿ ಪ್ರಕಟಣೆ ಪ್ರಕಟಗೊಂಡ ಮೂವತ್ತು ದಿನಗಳೊಳಗಾಗಿ ಯಾವುದೇ ಅಹವಾಲು ಇಲ್ಲವಾದಲ್ಲಿ ಸರ್ಕಾರದ ಪರವಾಗಿ ಸದರಿ ವಾಹನ ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 10.07.2003ರಂದು ಪುಟ ಸಂಖ್ಯೆ: 887 ರಿಂದ 888ರಲ್ಲಿ ಪ್ರಕಟಿಸಲಾಗಿದೆ. ದಿನಾಂಕ: 28.06.2003ರ ಶಿವಮೊಗ್ಗದ ಕ್ರಾಂತಿದೀಪ ಪತ್ರಿಕೆಯಲ್ಲೂ ಸಹಾ ಈ ಪ್ರಕಟಣೆ ಪ್ರಕಟಗೊಂಡಿದೆ.

ಮೇಲ್ಕಂಡ ದಿನಾಂಕ: 11.06.2003ರ ಪ್ರಕಟಣೆ ಪ್ರಕಟಗೊಂಡ ದಿನಾಂಕದಿಂದ ಇಲ್ಲಿಯವರೆವಿಗೂ ಯಾವುದೇ ಅಹವಾಲುಗಳು ಬಂದಿಲ್ಲ ಮತ್ತು ಯಾರೊಬ್ಬರೂ ಇದುವರೆವಿಗೂ ಈ ಕೆಳಕಂಡ ವಾಹನ ಮತ್ತು ಶ್ರೀಗಂಧವನ್ನು ತಮ್ಮದೆಂದು ರುಜುವಾತು ಪಡಿಸಲು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಸದರಿ ವಾಹನದ ವಾರಸುದಾರರು ಈ ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ರುಜುವಾತುಪಡಿಸಿರುವುದಿಲ್ಲ.

**ಆದೇಶ ಸಂಖ್ಯೆ: ಬಿ1-71ಎ-ಸಿ.ಆರ್:1:2003-04, ದಿನಾಂಕ: 12ನೇ ಆಗಸ್ಟ್, 2003**

ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಎ ಯಿಂದ 71ಜಿ ಪ್ರಕಾರ ಈ ಕೆಳಕಂಡ ವಾಹನಗಳು ಮತ್ತು ಶ್ರೀಗಂಧವನ್ನು ಈ ಆದೇಶದ ಮೂಲಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶದನ್ವಯ ಈ ಕೆಳಕಂಡ ವಾಹನ ಹಾಗೂ ಶ್ರೀಗಂಧದ ಪ್ರಮಾಣದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ ಯಾವುದೇ ರೀತಿಯ ಹಕ್ಕು ಇರುವುದಿಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ/ ಪೊಲೀಸ್ ಕ್ರೈಂ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| | | **(1) ಮಂಡಗದ್ದೆ ವಲಯ** | | |
| 1. | 68/02-03 | ಮಾರುತಿ ವ್ಯಾನ್ ನಂ. ಕೆ.ಎ. 31-3841 | | STQ-IN-920909 |
| 2. | 106/02-03 | ಬಜಾಜ್ ಸೂಪರ್ ಸ್ಕೂಟರ್ ನಂ. ಕೆ.ಎ. 14 ಇ 9223 | E-05-EA 178525 | 05C-93 B 03467 |
| 3. | 113/02-03 | ಟಿ.ವಿ.ಎಸ್. ಸುಜುಕಿ ಮೋಟಾರ್ ಬೈಕ್ ನಂ. ಕೆ.ಎ. 20 ಇ 1823 | 1010 M 282966 | 1010F 278061 |
| 4. | 05/03-04 | ಬಜಾಜ್ ಮೋಟಾರ್ ಬೈಕ್ ನಂ. ಕೆ.ಎ. 18 ಇ 3538 | | F31 EA 031694 |
| 5. | 07/03-04 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆ.ಎ. 14 ಹೆಚ್ 1822 | 06 M 94 A 06031 | 06F 94 A 19809 |
| | | **(2) ಆಯನೂರು ವಲಯ** | | |
| 6. | 284/01-02 | ಬಜಾಜ್ ಸ್ಕೂಟರ್ ನಂ. ಸಿ.ಆರ್.ಎಂ. 1332 | 1 GM 38845 | |
| 7. | 234/02-03 | ಫಿಯಟ್ ಕಾರು ನಂ. ಸಿ.ಟಿ.ಎ. 9487 | AEA-C-2369 | |
| | | **(3) ರಿಪ್ಪನ್ ಪೇಟೆ ವಲಯ** | | |
| 8. | 112/02-03 | ಬಜಾಜ್ ಎಂ. 80 ಸ್ಕೂಟರ್ ನಂ. ಕೆ.ಎ. 14 ಇ 8616 | E 16 EA 187758 | C 16 EA 186951 |
| 9. | 115/02-03 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆ.ಎ. 31 ಇ 1860 | M 06 CJ 145001 | F 06 CJ 156360 |
| 10. | 130/02-03 | ಬಜಾಜ್ ಎಂ. 80 ಸ್ಕೂಟರ್ ನಂ. ಕೆ.ಎ. 15 ಜೆ. 1486 | FAM-BGM-09780 | 09577 |
| | | **(4) ತೀರ್ಥಹಳ್ಳಿ ವಲಯ** | | |
| 11. | 96/02-03 | ಬಜಾಜ್ ಸ್ಕೂಟರ್ ನಂ. ಕೆ.ಎ. 14 ಇ 7933 | E 06 DK 431725 | C 06 DK 431197 |
| 12. | 97/02-03 | ಬಜಾಜ್ ಎಂ. 80 ಸ್ಕೂಟರ್ ನಂ. ಕೆ.ಎ. 14 ಇ 9346 | 16E 93 C 10617 | 16 C 93 C 11063 |
| 13. | 102/02-03 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆ.ಎ. 30 ಇ 1224 | 028220 | 030563 |

**ಜಿ. ಜಯರಾಮಯ್ಯ**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್.985